# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 15 |
| ಸದಸ್ಯರ ಹೆಸರು | : | ಶ್ರೀ ಪ್ರಾಣೇಶ್ ಎಂ.ಕೆ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 09-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದ ಮೂರು ತಿಂಗಳುಗಳಿಂದ ಸುರಿದ ಭಾರಿ ಮಳೆಯಿಂದ "ಕಾಫಿ ತೋಟಗಳು" ನಾಶವಾಗಿದ್ದು, ಇದರಿಂದ ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಹಾಗಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಚಿಕ್ಕಮಗಳೂರು ಜಿಲ್ಲೆಯಲ್ಲಿ 2020ರ ಆಗಸ್ಟ್ ಮಾಹೆಯಿಂದ ಅಕ್ಟೋಬರ್ ರವರೆಗೆ ಸುರಿದ ಭಾರೀ ಮಳೆಯಿಂದ 9600ಹೆಕ್ಟೇರ್ ಕಾಫಿ ಬೆಳೆ ನಾಶವಾಗಿದ್ದು, SDRF/NDRF ಮಾರ್ಗಸೂಚಿಯಂತೆ ಪರಿಹಾರ ತಂತ್ರಾಂಶದ ಮೂಲಕ ಪರಿಹಾರವನ್ನು ನೇರವಾಗಿ ರೈತರ ಖಾತೆಗೆ ನೀಡಲು ಕ್ರಮವಹಿಸಲಾಗಿದೆ. |
| (ಇ) | ಸಂಕಷ್ಟಕ್ಕೀಡಾದ ರೈತರಿಗೆ ಪರಿಹಾರ ನೀಡಲಾಗಿದೆಯೇ; ನೀಡಿದ್ದಲ್ಲಿ ಫಲಾನುಭವಿಗಳ ಸಂಪೂರ್ಣ ಮಾಹಿತಿ ಹಾಗೂ ಪರಿಹಾರದ ಮೊತ್ತದ ವಿವರ ನೀಡುವುದು: | ಚಿಕ್ಕಮಗಳೂರು ಜಿಲ್ಲೆಯಲ್ಲಿ 2020ನೇ ಸಾಲಿನಲ್ಲಿ ಹಾನಿಯಾದ ತೋಟಗಾರಿಕೆ, ಕೃಷಿ ಮತ್ತು ಕಾಫಿ ಬೆಳೆಗಳಿಗೆ ಒಟ್ಟಾರೆಯಾಗಿ ಇಲ್ಲಿಯವರೆಗೂ ಪರಿಹಾರ ತಂತ್ರಾಂಶದ ಮೂಲಕ 17322 ಸಂತ್ರಸ್ಥ ರೈತರಿಗೆ ರೂ.2589.66ಲಕ್ಷ ಪರಿಹಾರವನ್ನು ಸರ್ಕಾರದಿಂದ ನೇರವಾಗಿ ರೈತರ ಬ್ಯಾಂಕ್ ಖಾತೆಗೆ ಜಮಾ ಮಾಡಲಾಗಿದೆ. |
| (ಈ) | ಪರಿಹಾರ ನೀಡದೇ ಇರುವ ರೈತರಿಗೆ ಯಾವ ಕಾಲಮಿತಿಯಲ್ಲಿ ಪರಿಹಾರ ನೀಡಲಾಗುವುದು; (ವಿವರ ನೀಡುವುದು) | ಬೆಳೆ ತಂತ್ರಾಂಶದಲ್ಲಿ ಸಂತ್ರಸ್ಥರ ವಿವರವನ್ನು ನಮೂದಿಸಿ ಗ್ರಾಮ ಲೆಕ್ಕಿಗರು ಮತ್ತು ತಹಸೀಲ್ದಾರರ ಅನುಮೋದನೆಯಾದ 15 ದಿನಗಳಿಗೊಮ್ಮೆ ಸರ್ಕಾರದಿಂದ ಪರಿಹಾರ ತಂತ್ರಾಂಶದ ಮೂಲಕ ಬಿಡುಗಡೆಯಾಗುತ್ತಿರುತ್ತದೆ. |
| (ಉ) | ಯಾವ ಯಾವ ಮಾನದಂಡಗಳನ್ನು ಆಧರಿಸಿ ಪರಿಹಾರ ನೀಡಲಾಗಿದೆ? (ವಿವರ ನೀಡುವುದು) | SDRF/NDRF ಮಾರ್ಗಸೂಚಿಯಲ್ಲಿನ ಮಾನದಂಡಗಳನ್ನು ಅನುಸರಿಸಿ ಪರಿಹಾರ ನೀಡಲಾಗಿದೆ |

ಕಂಇ 615 ಟಿಎನ್ಆರ್ 2020

**(ಆರ್. ಅಶೋಕ)**
ಕಂದಾಯ ಸಚಿವರು

| | | | |
|---|---|---|---|
| 5 | ಶೃಂಗೇರಿ | 55 | 54 |
| 6 | ಕಡೂರು | 56 | 56 |
| 7 | ತರೀಕೆರೆ | 41 | 41 |
| 8 | ಅಜ್ಜಂಪುರ | 28 | 28 |
| | **ಒಟ್ಟು** | **568** | **560** |

ಮನೆ ಹಾನಿ ಸಂತ್ರಸ್ತರಿಗೆ ಪರಿಹಾರ ವಿತರಿಸುವ ಸಂಬಂಧ ಸರ್ಕಾರದಿಂದ ಒಟ್ಟು ರೂ. 374.04ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ. ನಿಗಮದ ತಂತ್ರಾಂಶದಲ್ಲಿ ಅನುಮೋದಿಸಲಾದ ಸಂತ್ರಸ್ತರಿಗೆ ಪರಿಹಾರ ಪಾವತಿಸಲು ಈವರೆಗೂ ರೂ.94.73ಲಕ್ಷವನ್ನು ವ್ಯವಸ್ಥಾಪಕ ನಿರ್ದೇಶಕರು, RGRHCL ರವರಿಗೆ ವರ್ಗಾಯಿಸಲಾಗಿರುತ್ತದೆ. ನಿಯಮಾನುಸಾರ ಪರಿಹಾರ ನೀಡಲು ಅನುದಾನದ ಕೊರತೆ ಇರುವುದಿಲ್ಲ.
(http://parihara.karnataka.gov.in/Pariharahome/
ಅಂತರ್ಜಾಲ ತಾಣದಲ್ಲಿ ಮಾಹಿತಿ ಲಭ್ಯವಿದೆ)

(ಈ) ಪರಿಹಾರ ನೀಡದೇ ಇರುವವರಿಗೆ ಯಾವ ಕಾಲ ಮಿತಿಯಲ್ಲಿ ಪರಿಹಾರ ನೀಡಲಾಗುವುದು; (ವಿವರ ನೀಡುವುದು)

ನಿಯಮಾನುಸಾರ ಅರ್ಹರಿರುವ ಮನೆ ಹಾನಿಯಾದ ಸಂತ್ರಸ್ತರ ಅಗತ್ಯ ದಾಖಲೆಗಳೊಂದಿಗೆ RGRHCL ತಂತ್ರಾಂಶದ ಮೂಲಕ ನಮೂದಿಸಲಾಗುವುದು. ತದನಂತರ ಸಂತ್ರಸ್ತರ ಬ್ಯಾಂಕ್ ಖಾತೆಗೆ ಅನುದಾನ ಜಮೆಯಾಗುವುದು.

(ಉ) ಯಾವ ಯಾವ ಮಾನದಂಡನೆಗಳನ್ನು ಆಧರಿಸಿ ಪರಿಹಾರ ನೀಡಲಾಗಿದೆ? (ವಿವರ ನೀಡುವುದು)

| ಕ್ರ. ಸಂ. | ಮನೆ ಹಾನಿ ಪ್ರಮಾಣ | ವರ್ಗ | ಮಾರ್ಗ ಸೂಚಿ ದರ | ಪರಿಷ್ಕೃತ ದರ |
|---|---|---|---|---|
| 1 | ಶೇ.75 ಕ್ಕಿಂತ ಹೆಚ್ಚು ಸಂಪೂರ್ಣ ಮನೆಹಾನಿ | 'ಎ' | 95,100/- | 5,00,000/ |
| 2 | ಶೇ.25-75 ಭಾಗಶಃ ಮನೆ ಹಾನಿ (ಪುನರ್‌ನಿರ್ಮಾಣ) | 'ಬಿ' | | 5,00,000/- |
| 3 | ಶೇ.25-75 ಭಾಗಶಃ ಮನೆ ಹಾನಿ (ದುರಸ್ತಿ) | 'ಬಿ1' | | 3,00,000/- |
| 4 | ಶೇ.15-25 ರಷ್ಟು ಅಲ್ಪ ಸ್ವಲ್ಪ ಮನೆಹಾನಿ | 'ಸಿ' | 5,200/- | 50,000/- |

ಪೂರ್ಣ ಹಾಗೂ ತೀವ್ರ ಮನೆ ಹಾನಿಯಾದ ಸಂತ್ರಸ್ತರು ತಮ್ಮ ಮನೆಯನ್ನು ತಾವೇ ಖುದ್ದಾಗಿ ಪುನರ್ ನಿರ್ಮಾಣ / ದುರಸ್ತಿ ಮಾಡಿಸಿಕೊಳ್ಳಲು ಪರಿಷ್ಕೃತ ದರದಲ್ಲಿ ಮನೆ ನಿರ್ಮಾಣದ ಹಂತ ಹಂತವಾಗಿ ವಿವಿಧ ಕಂತಿನಲ್ಲಿ ತಲಾ ರೂ.1.00ಲಕ್ಷದಂತೆ RGRHCL ಸಂಸ್ಥೆಯ ಮೂಲಕ ತಂತ್ರಾಂಶದನ್ವಯ ಪರಿಹಾರ ಪಾವತಿಸಲಾಗುತ್ತಿದೆ. (ಮೊದಲನೇ ಕಂತು – ತಳಪಾಯ ಹಂತ, ಎರಡನೇ ಕಂತು- ಲಿಂಟಲ್ ಹಂತ, ಮೂರನೇ ಕಂತು – ಛಾವಣಿ ಹಂತ ಮತ್ತು ನಾಲ್ಕನೇ ಕಂತು – ಪೂರ್ಣ). 'ಸಿ' ವರ್ಗದ ಮನೆಗಳಿಗೆ ಒಂದೇ ಕಂತಿನಲ್ಲಿ ಪರಿಹಾರ ಪಾವತಿಸಲಾಗುತ್ತಿದೆ.

ಕಂಇ 616 ಟಿಎನ್‌ಆರ್ 2020

**(ಆರ್. ಅಶೋಕ)**
ಕಂದಾಯ ಸಚಿವರು